

# ಗಾಲಿ ಕುರ್ಚಿಯೇ ನನ್ನ ಕಾಲುಗಳು

# MY FEET ARE THE WHEEL CHAIR

ಫ್ರಾನ್ಸ್ ಜೋಸೆಫ್ ಹುಯೇಗ್ / FRANZ-JOSEPH HUAINIGG

ಚಿತ್ರ ಕಲಾವಿದರು – Illustration
ಡಾ. ರಾಜರ್ಷಿ ಸೆನ್‌ಗುಪ್ತ / DR RAJARSHI SENGUPTA

ಕನ್ನಡ ಅನುವಾದ – Translation
ವಿ.ಎಸ್.ಎಸ್.ಶಾಸ್ತ್ರಿ / VSS SASTRY



# ಗಾಲಿ ಕುರ್ಚಿಯೇ ನನ್ನ ಕಾಲುಗಳು

ಲೇಖಕರು
ಫ್ರಾನ್ಸ್ ಜೋಸೆಫ್ ಹುಯೇಗ್

ಕನ್ನಡ ಅನುವಾದ
ವಿ.ಎಸ್.ಎಸ್.ಶಾಸ್ತ್ರಿ

ಚಿತ್ರ ಕಲಾವಿದರು
ಡಾ. ರಾಜರ್ಷಿ ಸೇನ್ ಗುಪ್ತ

# MY FEET ARE THE WHEELCHAIR

Written by
FRANZ-JOSEPH HUAINIGG

Kannada translation
VSS SASTRY

Illustrated by
DR RAJARSHI SENGUPTA



ಭಾರತ ಜ್ಞಾನ ವಿಜ್ಞಾನ ಸಮಿತಿ–ಕರ್ನಾಟಕ
Bharat Gyan Vigyan Samiti - Karnataka
ಬೆಂಗಳೂರು • Bengaluru

*Galu Kurchiye Nanna Kalugalu*
*a Kannada translation of the original My Feet Are the Wheelchair*

*Written by*
Franz-Joseph Huainigg

*Kannada translation by*
VSS Sastry

*Illustrated by*
Dr Rajarshi Sengupta

*Cover Design*
Dr Rajarshi Sengupta

*Layout Design*
Murali K, Print Hut

*First Bilingual Edition* December, 2007
*Reprint* November, 2020

*Print run* 3000

*Price* 80 INR



*Printed at*
Print Hut
Govindarajnagar, Bengaluru

*Published by*
Bharat Gyan Vigyan Samiti (BGVS) - Karnataka
Second Floor, Old Chemical Engineering Building
Indian Institute of Science, Bengaluru 560 012
bgvskarnataka@gmail.com

## ಆತ್ಮೀಯ ಓದುಗರೇ

ನಮ್ಮ ಸುತ್ತಲಿನ ಜನರ ಬಗ್ಗೆ ಕಥೆ ಹೇಳುವುದು ಮತ್ತು ಕೇಳುವುದು ಎಂದರೆ ನಮಗೆಲ್ಲ ಇಷ್ಟ, ಜೊತೆಗೆ ಜನರಲ್ಲಿರುವಂತೆ ಈ ಕಥೆಗಳಲ್ಲೂ ವೈವಿಧ್ಯತೆ ಇರುತ್ತವೆ.

ಗಾಲಿಕುರ್ಚಿಯೇ ಕಾಲುಗಳಾಗಿರುವ ಒಬ್ಬ ಹುಡುಗಿಯ ಕುತೂಹಲಕಾರಿ ಕಥೆ ಇದು. ಕಥೆಯನ್ನು ಓದುತ್ತಾ ಹೋದಂತೆ ಆಕೆ ಎಷ್ಟು ವಿಭಿನ್ನ ಎಂದು ನಮಗೆ ತಿಳಿಯುತ್ತದೆ. ನಾವೂ ಒಬ್ಬರಿಗಿಂತ ಒಬ್ಬರು ವಿಭಿನ್ನರೇ ಅಲ್ಲವೇ? ನಮ್ಮ ನಮ್ಮ ಕಥೆಗಳಲ್ಲಿ ನಾವೆಲ್ಲ ಸಹಸಂಬಂಧಿಗಳೇ ಅಲ್ಲವೇ. ಓದಿನ ಮೂಲಕ ನಾವು ಹೊಸ ಕಥೆಗಳನ್ನು, ಜನರ ಬದುಕನ್ನು, ಅವರ ಆಲೋಚನೆಗಳನ್ನು, ಭಾವನೆಗಳನ್ನು, ಅಭಿವ್ಯಕ್ತಿಯನ್ನು ಮತ್ತು ಅವರ ಜಗತ್ತನ್ನು ಕಲ್ಪಿಸಿಕೊಳ್ಳುವುದು ಸಾಧ್ಯ. ಕಾಲ ಕಳೆದಂತೆ ನಮಗೆ ನಾವೇ ಓದಿನ ಸುಖವನ್ನು ಕಲ್ಪಿಸಿಕೊಳ್ಳುವುದು ಸಾಧ್ಯವಾಗುತ್ತದೆ.

ಭೂತ, ಭವಿಷ್ಯ ಮತ್ತು ವರ್ತಮಾನದ ಜಗತ್ತುಗಳನ್ನು ಜನ ಕಂಡುಕೊಳ್ಳಲು ಓದು ಎನ್ನುವುದು ಒಂದು ಮೂಲಭೂತ ಸಾಮರ್ಥ್ಯ. ಹಾಗಾಗಿ ನಾವು ಮುದ್ರಿಸುತ್ತೇವೆ, ಹಂಚುತ್ತೇವೆ ಮತ್ತು ಜೊತೆಗೆ ಓದುತ್ತೇವೆ. ಈ ಪುಸ್ತಕದ ಮೊದಲ ಆವೃತ್ತಿಯನ್ನು 2007ನೇ ಇಸವಿಯಲ್ಲಿ ಅನುವಾದಿಸಿ ಪ್ರಕಟಿಸಲಾಯಿತು. ರಾಷ್ಟ್ರೀಯ ಜನವಾಚನ ಪ್ರಚಾರ ಅಭಿಯಾನದ ಸಂದರ್ಭದಲ್ಲಿ ಬಿಜಿವಿಎಸ್ ಜನರನ್ನು ಓದಿನಲ್ಲಿ ತೊಡಗಿಸಿಕೊಳ್ಳಲು ಮತ್ತು ಓದುವಿಕೆಯನ್ನು ಪ್ರೋತ್ಸಾಹಿಸಲು ಜನವಾಚನ ಎಂಬ ಉಪಕ್ರಮವನ್ನು ಪ್ರಾರಂಭಿಸಿತು. ಮಕ್ಕಳು, ಶಿಕ್ಷಕರು ಮತ್ತು ಪೋಷಕರು ಈ ಪುಸ್ತಕಗಳನ್ನು ಬಹಳವಾಗಿ ಇಷ್ಟಪಟ್ಟರು ಹಾಗಾಗಿ ಇದು ಮರು ಮುದ್ರಣಗೊಳ್ಳುತ್ತಿದೆ.

ಫ್ರಾನ್ಸ್ ಜೋಸೆಫ್ ಹುಯೇಗ್ (Franz-Joseph Huainigg) ಎನ್ನುವ ಆಸ್ಟ್ರಿಯಾ ದೇಶದ ಬರಹಗಾರ 1993ರಲ್ಲಿ ಈ ಪುಸ್ತಕವನ್ನು ಬರೆದ. ಆತ ಆಸ್ಟ್ರಿಯಾ ದೇಶದ ಮಾಜಿ ಸಂಸತ್ ಸದಸ್ಯನಾಗಿದ್ದ ಮತ್ತು ತನ್ನ ಬಾಲ್ಯದಲ್ಲಿ ತೀವ್ರ ಅಂಗವೈಕಲ್ಯದಿಂದ ಬಳಲುತ್ತಿದ್ದ. ಆತ "ಗಾಲಿ ಕುರ್ಚಿಯೇ ನನ್ನ ಕಾಲುಗಳು" ಎಂಬ ಈ ಪುಸ್ತಕದಲ್ಲಿ ಒಬ್ಬ ಹುಡುಗಿ ಮತ್ತು ಅವಳ ಸುತ್ತಲಿನ ಜನರ ಕಥೆಯನ್ನು ಹೇಳಿದ್ದಾನೆ.

ಕಾಗದ, ಗೊಂಬೆಗಳು ಮತ್ತು ಕಥೆಗಳ ಮೂಲಕ ವಿಜ್ಞಾನ ಮತ್ತು ಗಣಿತವನ್ನು ಕಲಿಸಲು ಸಂತೋಷಪಡುವ ವಿ.ಎಸ್.ಎಸ್.ಶಾಸ್ತ್ರಿಯವರು ಈ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಕಲಾವಿದರು ಮತ್ತು ಕಲಾ ಇತಿಹಾಸಕಾರರಾದ ಡಾ. ರಾಜರ್ಷಿ ಸೆನ್ ಗುಪ್ತ ಈ ಪುಸ್ತಕಕ್ಕೆ ಬೇಕಾದ ಸುಂದರ ಚಿತ್ರಗಳನ್ನು ರಚಿಸಿ ನಮಗೆ ಕುಸುಮಾಳ ಕಥೆಯನ್ನು ಹೇಳಿದ್ದಾರೆ. ಈ ಚಿತ್ರಗಳು ನಮಗೆ ಕುಸುಮಾ, ಜಾನು, ಪುಟ್ಟಿ ಮತ್ತು ಅವರ ಸುತ್ತಲಿನ ಜಗತ್ತನ್ನು ಸುಂದರವಾಗಿ ಕಟ್ಟಿಕೊಡುತ್ತವೆ.

ಈ ಸುಂದರ ಕಥೆಯನ್ನು ನಮಗೆ ಹೇಳಿದ್ದಕ್ಕಾಗಿ ಫ್ರಾನ್ಸ್ ಜೋಸೆಫ್ ಹುಯೇಗ್ (Franz-Joseph Huainigg) ಅವರಿಗೆ ನಾವು ಪ್ರೀತಿಪೂರ್ವಕ ಕೃತಜ್ಞತೆ ಸಲ್ಲಿಸುತ್ತೇವೆ. ಜೊತೆಗೆ ಅನುವಾದಿಸಿದ್ದಕ್ಕಾಗಿ ವಿ.ಎಸ್.ಎಸ್.ಶಾಸ್ತ್ರಿ ಮತ್ತು ಕುಸುಮಾ ಮತ್ತು ಅವಳ ಸ್ನೇಹಿತರ ಜಗತ್ತನ್ನು ಚಿತ್ರಗಳ ಮೂಲಕ ಕಟ್ಟಿದ ಡಾ. ರಾಜರ್ಷಿ ಸೆನ್ ಗುಪ್ತ ಅವರಿಗೂ ವಂದನೆಗಳು.

ಪ್ರಕಟಣಾ ಉಪಸಮಿತಿ
ಭಾರತ ಜ್ಞಾನವಿಜ್ಞಾನ ಸಮಿತಿ, ಕರ್ನಾಟಕ

To the reader...

We love to tell, hear the stories of people around us. And, much like the people, these stories are different.

This is a very interesting story of a girl whose legs are the wheelchair. As we read the story we may find her to be different. But, then, aren't we all different from each other? And, yet, we may all relate to most of us in our stories.

With reading, we discover new stories, the lives of people, their thoughts, emotions, expressions and imagine their worlds. Over time, we discover the joy of reading for us.

Reading is a fundamental competency that allows people to discover the worlds of the past, present and future. So, we publish, distribute and often read together. We translated the first edition of this book into Kannada in 2007, during the nationwide jana vachana campaign - a people's reading initiative of BGVS to engage and encourage reading. This reprint tells us that children, teachers, and parents liked the book. They, perhaps, readout and told the story to others!

Franz-Joseph Huainigg is an Austrian author and wrote this book in 1993. He is a former member of the Austrian parliament and suffered severe disability in his early years of childhood. He told the story of a young girl and the people around her in "My feet are the wheelchair".

VSS Sastry, who loves to teach science and maths using papers, puppets and stories, translate this book to Kannada.

Dr Rajarshi Sengupta, an artist and art historian, illustrated the story of Kusuma for us. His beautiful and expressive drawings allow us to the colourful world of Kusuma, Jaanu, Putti and the people around them.

We thank and express our love to Franz-Joseph Huainigg for telling us this wonderful story. And, to VSS Sastry for his translation and to Rajarshi Sengupta for drawing the world of Kusuma and her friends for us.

**Publications sub-committee**
Bharat Gyan Vigyan Samiti, Karnataka





ಪ್ರತಿ ದಿನ ಮಂಚದ ಮೇಲೆ ಮಲಗುವ ಕುಸುಮಾಗೆ ಮುಂಜಾನೆ ಏಳು ಗಂಟೆಗೆ ನಿದ್ದೆಯಿಂದ ಎಚ್ಚರವಾಗುತ್ತದೆ.
ಅರೆ ನಿದ್ದೆಯಲ್ಲಿ ಹಾಸಿಗೆಯ ಮೇಲೆ ಕೂರುತ್ತಾಳೆ.
ನಂತರ ಬಟ್ಟೆ ಹಾಕಿಕೊಳ್ಳಲು ಶುರು ಮಾಡುತ್ತಾಳೆ.

Kusuma wakes up every morning at seven o'clock.
Sleepily she sits up in bed.
Then she begins to get dressed.



ಪಾದಗಳನ್ನು ಶೂಗಳ ಒಳಗೆ ತೂರಿಸಲು ಅವಳಿಗೆ ಬಲು ಕಷ್ಟ.
ಅವಳ ಕೈ ಬೆರಳುಗಳು ಕಾಲಿನ ಬೆರಳುಗಳನ್ನು ಮುಟ್ಟುವುದಿಲ್ಲ.
ಪ್ರತಿದಿನ ಎಂಟು ಗಂಟೆಗೆ ಕುಸುಮ ಉಡುಪು ಧರಿಸಿ ರೆಡಿಯಾಗಿರುತ್ತಾಳೆ.
ನಂತರ ತನ್ನ ಎರಡೂ ಕಾಲುಗಳನ್ನು ಅಪ್ಪಿ ಹಿಡಿದು ಮಂಚದ ಕೊನೆಗೆ ಎಳೆದು ತರುತ್ತಾಳೆ.

She finds it difficult to slip into her shoes.
Her fingers can barely reach her toes.
Every morning at eight o'clock Kusuma is dressed and ready.
Then she holds her legs and pulls them over the edge of the bed.



ಬೆಳಗಿನ ಉಪಹಾರವನ್ನು ಟೇಬಲ್‌ನ ಮೇಲೆ ಇಟ್ಟಿರುತ್ತಾರೆ. 'ಅಮ್ಮಾ, ನೀನು ನನಗಾಗಿ ಜಾಮ್ ತಂದು ಕೊಡು' ಎಂದಳು. ಅದು ಅಲ್ಲೇ ಗೂಡಿನಲ್ಲಿದೆ, ಪಕ್ಕದ ರೂಮಿನಲ್ಲಿದ್ದ ಅಮ್ಮ ಕೂಗಿ ಹೇಳಿದಳು. ಕುಸುಮ ಜಾಮ್‌ನ್ನು ತಾನೇ ತೆಗೆದುಕೊಂಡಳು. ಇತರರು ತನ್ನ ಪಕ್ಕ ನಿಂತು ಸಹಾಯ ಮಾಡುವುದು ಅವಳಿಗೆ ಇಷ್ಟವಾಗುವುದಿಲ್ಲ.
ನೀನು ಅಂಗಡಿಗೆ ಹೋಗಿ ಬರುತ್ತೀಯಾ? ಎಂದಳು ಅಮ್ಮ. ಅದು ನನಗೆ ಇಷ್ಟ ಎಂದಳು ಕುಸುಮ, ಸೂಪರ್ ಮಾರ್ಕೆಟ್‌ಗೆ ಇದೇ ಮೊದಲ ಸಲ ಅವಳ ಅಮ್ಮ ಕಳಿಸುತ್ತಿರುವುದು.
ನಾನು ಏನೇನು ತರಬೇಕು? ಉತ್ಸಾಹದಿಂದ ಕೇಳಿದಳು ಕುಸುಮ. 'ಒಂದು ಲೀಟರ್ ಹಾಲು ಮತ್ತು ಆರು ಸೇಬು'.
ನೀನೊಬ್ಬಳೇ ಅಂಗಡಿಗೆ ಹೋಗಿ ತರಬಲ್ಲೆಯಾ? ಎಂದಳು ಅವಳ ಅಮ್ಮ.
"ಖಂಡಿತ" ಎಂದ ಕುಸುಮ ಶಾಪಿಂಗ್ ಮಾಡಲು ಖುಷಿಯಿಂದ ಹೊರಟಳು.

Breakfast is already on the table. "Mummy, can you bring me the jam?" asks Kusuma. "It's in the cupboard," comes the answer from the living room. Kusuma gets the jam herself. She is happy not to have someone waiting on her.

"Will you go shopping for me?" asks her mother. "I'd love to," says Kusuma readily. It is the first time that she is being allowed to go to the market alone. "What all should I bring?" she asks excitedly. "A litre of milk and six apples. Will you be able to manage it on your own?"

"Certainly," smiles Kusuma and goes off proudly to do the shopping.



ಕುಸುಮಾಗೆ ಬೀದಿಯಲ್ಲಿನ ಜನಜೀವನ ಇಷ್ಟ.
ಅಂದು ರಜೆಯ ದಿನ. ಮಕ್ಕಳು ಎಲ್ಲೆಡೆ ಆಟವಾಡುತ್ತಿದ್ದರು.
ಕುಸುಮ ನಿಂತು ಸ್ಕಿಪ್ಪಿಂಗ್ ಆಡುವ ಮಕ್ಕಳನ್ನು ನೋಡತೊಡಗಿದಳು.
ಹಾಗೆಯೇ ಚೆಂಡಾಟ ಆಡುವವರನ್ನು, ಚೆಂಡೆಸೆದು ಕ್ಯಾಚ್ ಹಿಡಿಯುವವರನ್ನು ಕಂಡಳು.
ಅವಳಿಗೆ ಬೇಸರವಾಯಿತು. ಅವಳಿಗೂ ಅವರ ಜೊತೆಯಲ್ಲಿ ಆಟವಾಡಲು ಆಸೆಯಾಗುತ್ತಿತ್ತು.

Kusuma likes the life on the street.
It is holiday time and children are playing everywhere.
Kusuma stops and watches them skip, play ball and catch-catch.
She is little sad. She would have loved to play with them.



ಆಟದ ಮೈದಾನದಲ್ಲಿ ಕುಸುಮ ಒಬ್ಬ ಹುಡುಗಿಯನ್ನು ನೋಡಿದಳು.

ಆ ಹುಡುಗಿಯ ಅಮ್ಮ ಅವಳನ್ನು ಕರೆದುಕೊಂಡು ಹೋಗಲು ಬಂದಳು.

ಕುಸುಮ ಮತ್ತು ಹುಡುಗಿ ಒಬ್ಬರನ್ನೊಬ್ಬರು ಆಶ್ಚರ್ಯದಿಂದ ನೋಡಿದರು.

At the playground she sees a girl
whose mother has just come to fetch her.
They look at each other curiously.



ನಂತರ ಮಕ್ಕಳ ಗುಂಪೊಂದು ಒಬ್ಬ ಹುಡುಗನನ್ನು ಚುಡಾಯಿಸುತ್ತಿರುವ ಕಡೆಗೆ ಕುಸುಮಾಳ ದೃಷ್ಟಿ ಹರಿಯಿತು.

ಅದು ಅವಳಿಗೆ ಹೀನಾಯವಾಗಿ ಕಂಡಿತು.

"ಕೆಂಪು ತಲೆ - ಬೆಂಕಿದೆವ್ವದವನೇ" ಎಂದು ಅವನನ್ನು ಚುಡಾಯಿಸುತ್ತಿದ್ದರು.

ಆ ಹುಡುಗನಿಗೆ ಇತರರಂತೆ ಕಪ್ಪು ಕೂದಲು ಇರಲಿಲ್ಲ.

Then Kusuma sees group of children teasing a boy. She finds it mean.

"Red-head, fire-devil....!" they shout after him.

Just because he doesn't look like the other children.



ಕುಸುಮಾಳನ್ನು ಅನೇಕರು ಮಾತನಾಡಿಸುತ್ತಿದ್ದರು. ಆದರೆ ಅವರು ಯಾರೂ ಅವಳಿಗೆ ಪರಿಚಿತರಲ್ಲ.

ಮೊದಮೊದಲು ಅವಳಿಗೆ ಸಂತೋಷವಾಗುತ್ತಿತ್ತು, ನಂತರ ಅವಳಿಗೆ ಮುಜುಗರವೆನಿಸುತ್ತಿತ್ತು.

ಅದೇಕೆ ಎಲ್ಲರೂ ನನ್ನನ್ನು ಹಾಗೆ ನೋಡುತ್ತಾರೆ? ಅಲ್ಲಿದ್ದ ಹೋಟೆಲ್ಲಿನವನೂ ಕೂಡ ನೋಡುತ್ತಿದ್ದಾನೆ.

ಅವಳು ಮೂರನೇ ಬಾರಿ ಹೊರಳಿ ನೋಡಿದಾಗಲೂ ಅವನು ನೋಡುತ್ತಲೇ ಇದ್ದ.

Many people greet Kusuma, although she doesn't know them.

At first she is pleased about it, but then she wonders,

"Why everyone looking at me like that?", especially the man in the cafe.

Even when she turns around third time, he is still staring.



ದಿನಪತ್ರಿಕೆ ಅಂಗಡಿಯ ಬಳಿ ಕುಸುಮ ಕೊಂಚ ಕಾಲ ನಿಂತಳು.

ಅಲ್ಲಿದ್ದ ಯಜಮಾನಿಯನ್ನು ಕಂಡು ಹಲೋ ಎಂದಳು.

'ಅಯ್ಯೋ ದೇವರೇ' ಇದೇನು ಪಾಪದ ಫಲವಪ್ಪಾ, ಅದು ಇಷ್ಟೊಂದು ಸಣ್ಣ ವಯಸ್ಸಿಗೆ' ಎಂದು ಆ ಹೆಂಗಸು ಚೀರಿದಳು.

ಕುಸುಮಾಗೆ ಮುಜುಗರವಾಯಿತು. ಅಲ್ಲಿಂದ ಬೇಗನೆ ಮುಂದೆ ಸಾಗಿದಳು.

Kusuma stops for a while at the newspaper stand.

She greets the sales-lady.

"Oh my god,"she cries. "What punishment and that too so young!"

Embarrassed, Kusuma goes away as quickly as she can.



ಆಟದ ಮೈದಾನದಲ್ಲಿದ್ದ ಹುಡುಗಿಯು ಕುಸುಮಾಗೆ ಮತ್ತೆ ಕಂಡಳು. ಅವಳು ಬಟ್ಟೆಯಂಗಡಿಯ ಬಳಿ ನಿಂತಿದ್ದಳು. ಆ ಹುಡುಗಿಯ ತಾಯಿ ಬಟ್ಟೆಗಳನ್ನು ನೋಡುತ್ತಿದ್ದಳು. 'ನಿನ್ನ ಬಳಿ ಇರುವ ಈ ವಿಚಿತ್ರ ವಸ್ತುವಿನ ಹೆಸರೇನು' ಎಂದು ಆ ಹುಡುಗಿ ಕುಸುಮಾಳನ್ನು ಕೇಳಿದಳು. ಅದು ಕೇವಲ... ಕುಸುಮಾ ಉತ್ತರಿಸಲು ಮುಂದಾದಳು.

"ಪುಟ್ಟಿ ನೀನು ಹಾಗೆಲ್ಲ ಕೇಳಬಾರದು, ಆ ಮಗುವಿಗೆ ನೋವಾಗುತ್ತದೆ, ಪುಟ್ಟಿ ನೀನು ನನಗೆ ಮುಜುಗರ ಉಂಟು ಮಾಡುತ್ತಿದ್ದೀಯಾ." ಎಂದು ಪುಟ್ಟಿಯನ್ನು ಅವಳ ತಾಯಿ ಪಕ್ಕಕ್ಕೆ ಸೆಳೆದಳು. ನಾನು ಎಲ್ಲ ಮಕ್ಕಳಂತೆ ಇದ್ದೇನೆ?

ಎಂದು ಕುಸುಮ ತನ್ನಲ್ಲೇ ಹೇಳಿಕೊಂಡಳು. ಪುಟ್ಟಿಯ ತಾಯಿಯು ಹಾಗೆ ಹೇಳಿದ್ದೇಕೆ ಎಂದು ಕುಸುಮಾಗೆ ತಿಳಿಯಲಿಲ್ಲ.

Kusuma sees the young girl from the playground again, in front of a clothes store. Her mother is looking at the clothes.

"What is this funny thing you have here?" the girl asks Kusuma. "That's only a...," Kusuma begins to reply.

But her mother pushes Putti angrily aside. "You shouldn't ask such questions, Putti! You really embarrass me."

"I am no different from the other children," Kusuma says sadly to herself. She doesn't understand Putti's mother.



ಅಲ್ಲೊಂದು ಬೆಂಚಿನ ಮೇಲೆ ಒಬ್ಬ ಅಜ್ಜ ಮತ್ತು ಅಜ್ಜಿ ಬಿಸಿಲು ಕಾಯಿಸಿಕೊಳ್ಳುತ್ತಿದ್ದರು.
'ನೀನೊಬ್ಬ ಅಸಹಾಯಕಳು' ಎಂದು ಆ ಅಜ್ಜಿ ಒಂದೆರಡು ಕಾಸನ್ನು ಕುಸುಮಾಳ ಕೈಗಿತ್ತಳು.
ನಾನು ಇತರ ಮಕ್ಕಳಂತೆ ಬಡವಳೂ ಹೌದು, ಸಾಹುಕಾರಳೂ ಹೌದು,
ಎಂದು ಕುಸುಮ ಹೇಳಬೇಕೆಂದಿದ್ದಳು. ಆದರೆ...

An old man and on old woman are sunning themselves on the bench.
"Because you are a poor thing,"
says the women and she puts some money into Kusuma's hand.

"I am as rich and as poor as the other children,"
Kusuma wants to tell the women. But...



...ಅಲ್ಲಿದ್ದ ಅಜ್ಜ ಬಹಳ ಕನಿಕರದಿಂದ 'ನಿನಗೆ ಏನಾಗಿದೆಯಮ್ಮ' ಎಂದರು.
ಕುಸುಮಾಗೆ ಕೋಪ ಬಂದು ಕೆಂಪಾದಳು. ಇವರಿಗೆಲ್ಲಾ ನನ್ನಿಂದ ಏನಾಗಬೇಕು?.
ಅಮ್ಮ ಈ ದಿನ ಮೊದಲ ಬಾರಿಗೆ ನನ್ನನ್ನು ಸ್ವತಂತ್ರವಾಗಿ ಅಂಗಡಿಗೆ ಕಳಿಸಿದ್ದಾರೆ.
ನಾನು ಇತರ ಮಕ್ಕಳಂತೆ ಇದ್ದೇನೆ ಎಂದು ಕಿರುಚಿಕೊಂಡಳು.
ಅವಳಿಗೆ ಈ ಅಜ್ಜ ಅಜ್ಜಿಯರು ಹೀಗೆ ಹೇಳಿದ್ದೇಕೆಂದು ತಿಳಿಯಲಿಲ್ಲ.

... the old man takes pity and asks Kusuma, "What happened to you?"
Kusuma turns red with anger. "What do they all want from me?"
just today, when I have been allowed to go shopping the first time
all by myself. "I'm no different from other children," she shouts.
She fails to understand the old man and the woman.



ಕುಸುಮ ಅಂತೂ ಸೂಪರ್ ಮಾರ್ಕೆಟ್ ಬಳಿ ಬಂದಳು. ಮುಂಭಾಗದ ಮೆಟ್ಟಿಲನ್ನು ಏರಲಾಗದೆಂದು ಅವಳಿಗೆ ಅನಿಸಿತು. ಯಾರೂ ಅವಳ ಸಹಾಯಕ್ಕೆ ಬರಲಿಲ್ಲ. ಅಲ್ಲಿ ಓಡಾಡುತ್ತಿದ್ದ ಜನರು ಬಹಳ ಗಡಿಬಿಡಿಯಲ್ಲಿದ್ದರು. ಯಾರೂ ಕುಸುಮಾಳ ಕಡೆ ಕಣ್ಣು ಹಾಯಿಸಲಿಲ್ಲ. ಕೆಂಪು ತಲೆಯವನೆಂದು ಚುಡಾಯಿಸಿಕೊಂಡ ಹುಡುಗ ಥಟ್ಟನೆ ಆವಳ ಮುಂದೆ ಬಂದು ನಿಂತ. ಅವನು ಅವಳನ್ನು ಅನುಸರಿಸಿಕೊಂಡೇ ಬಂದಿದ್ದ.

ಹಲೋ ನನ್ನ ಹೆಸರು 'ಜಾನು' ಎಂದು ಪರಿಚಯಿಸಿಕೊಂಡು "ನಾನು ನಿನಗೆ ಸಹಾಯ ಮಾಡಲೇ" ಎಂದು ಕೇಳಿದ.

'ನನ್ನ ಹೆಸರು ಕುಸುಮ' ಆಕೆ ಸಮಾಧಾನದಿಂದ ನಕ್ಕಳು.

ಕುಸುಮಾ ಹೇಳಿದಂತೆ ಜಾನು ಮಾಡಿದ. ಗಾಲಿ ಕುರ್ಚಿಯನ್ನು ಹಿಂದಕ್ಕೆ ಬಗ್ಗಿಸಿ ಮುಂದಿನ ಚಕ್ರ ಮೆಟ್ಟಿಲೇರುವಂತೆ ಮಾಡಿ ಹಿಂದಿನ ಚಕ್ರವನ್ನು ಮೇಲೆತ್ತಿ ಮುಂದೆ ದೂಡಿದ. ಥ್ಯಾಂಕ್ಯೂ ಎಂದಳು ಕುಸುಮ.

Finally, Kusuma reaches the market. At the entrance she notices that she cannot manage the step alone. No one helps her. Everyone is in a hurry. No one pays any attention to her. Suddenly the boy, who was being teased "red-head", is standing before her. He had been following her.

"Hello, I am Jaanu," he introduces himself. "Can I help you?"

"My name is Kusuma," she smiles in relief. "Please step on the pedal at the back," she begins to explain. Jaanu tilts the wheel-chair up according to Kusuma's instructions and raises the front wheels over the step. Then he raises the back wheels over the hurdle. "Thank you," she calls out to Jaanu.



ಅಂಗಡಿಯೊಳಗೆ ಸುಳಿದ ಕುಸುಮ, ಅಮ್ಮ ಹೇಳಿದ ಹಾಲಿನ ಪ್ಯಾಕೆಟ್ ಹುಡುಕಿ ಅದರ ಕಡೆ ಕೈಚಾಚಿದಳು. ತಕ್ಷಣವೇ ಯಾರೋ ಆ ಪ್ಯಾಕೆಟ್‌ನ್ನು ಅವಳ ಕೈಗಿಟ್ಟರು. ಅಲ್ಲಿದ್ದ ಸೇಲ್ಸ್ ಮ್ಯಾನ್ ಮುಗುಳ್ನಕ್ಕ.
ಅದನ್ನು ನಾನು ತೆಗೆದುಕೊಳ್ಳಲಾರೆನೇ? ಎಂದುಕೊಂಡಳು ಕುಸುಮ.

ನಂತರ ಹಣ್ಣುಗಳನ್ನಿಟ್ಟ ಕಡೆ ಕುಸುಮ ಹೊರಟಳು. ಅಲ್ಲಿದ್ದ ಸೇಬಿಗೆ ಕೈಚಾಚಿದಾಗ, ಸೇಲ್ಸ್ ಗರ್ಲ್ ಹಣ್ಣುಗಳನ್ನು ಕುಸುಮಾಳ ಕೈಗಿತ್ತಳು. ಸೇಲ್ಸ್ ಗರ್ಲ್ ಮುಗುಳ್ನಕ್ಕಳು.

ಕುಸುಮ ಕೋಪದಿಂದ ಸೇಬಿನ ಹಣ್ಣುಗಳನ್ನು ತನ್ನ ಗಾಲಿ ಕುರ್ಚಿಯಲ್ಲಿ ಕುಕ್ಕಿದಳು. "ನಾನು ಇತರರ ಹಾಗೆ ಸೇಬನ್ನು ತೆಗೆದುಕೊಳ್ಳಲಾರೆನೇ?" ಎಂದು ಕೂಗಿದಳು. ಸೇಲ್ಸ್ ಗರ್ಲ್ ಹಾಗೇಕೆ ಮಾಡಿದಳೆಂದು ಕುಸುಮಾಗೆ ತಿಳಿಯಲಿಲ್ಲ.

She soon finds the milk and is reaching out for it.
Suddenly someone hands it to her.
The salesman smiles. "Can't I take the milk on my own?" she wonders.

She finds the fruit stand and is just reaching out for a bag of apples, when it is handed to her. The salesgirl smiles.

Kusuma drops the apples angrily onto the wheelchair.
"Can't I take the apples myself, like the others," she calls out.
She doesn't understand the sales girl.



ಕುಸುಮ ಬಿಸ್ಕತ್ತು ಮತ್ತು ಚಾಕೊಲೇಟ್ ಇಟ್ಟಿದ್ದ ಶೆಲ್ಫ್ ನಡುವೆ ಕುಳಿತು ಅಳತೊಡಗಿದಳು.

"ಅಷ್ಟೊಂದು ಬೇಜಾರು ಪಟ್ಟುಕೊಳ್ಳಬೇಡ" ಯಾರೋ ಹೇಳಿದಂತಾಯಿತು. ಹಾಗೆಂದವನು ಜಾನು.

"ನನ್ನನ್ನು ಎಲ್ಲರೂ ವಿಚಿತ್ರವಾಗಿ ನೋಡುತ್ತಾರೆ" ಎಂದಳು ಕುಸುಮ.

"ನಿನ್ನ ಗಾಲಿ ಕುರ್ಚಿ ನೋಡಿ ಹಾಗಾಡುತ್ತಾರೆ" ಎಂದ ಜಾನು

"ಅದರಲ್ಲೇನು ಅಂತಹ ವಿಶೇಷ" ನಾನು ಹುಟ್ಟಿನಿಂದ ಕುಂಟಿ, ಎನ್ನುತ್ತಾಳೆ ಕುಸುಮ.

Kusuma sits between the shelves with chocolates and biscuits and cries.

"Don't be so sad," says someone suddenly. It is Jaanu.

"People behave as if I am some strange creature."

"That's because of your wheel-chair," says Jaanu.

"But there is nothing special about that", says Kusuma,
"I am lame since birth."



‘ಕುಂಟಿ’ ಎಂದರೆ ಏನೆಂದು ಜಾನು ಕೇಳಿದ.

“ನಾನು ನನ್ನ ಕಾಲುಗಳನ್ನು ಚಲಿಸಲಾರೆ”, “ಗಾಲಿ ಕುರ್ಚಿಯೇ ನನ್ನ ಕಾಲು”.
ಆದರೇನು? ನಾನು ಇತರ ಮಕ್ಕಳಂತೆಯೇ ಇದ್ದೇನಲ್ಲ” ಎಂದಳು ಕುಸುಮ.

“ಅಲ್ಲ ನೀನು ಬೇರೆ ತರಹ” ಎಂದು ಜಾನು ತಲೆಯಾಡಿಸಿದ.

“ಇಲ್ಲ!, ನೀನು ಮತ್ತು ನಾನು ಇಬ್ಬರೂ ಎಲ್ಲರಂತೆಯೇ ಇದ್ದೇವೆ” ಎಂದಳು ಕುಸುಮ.

“ನಿನಗೆ ಗಾಲಿ ಕುರ್ಚಿಯಿದೆ, ನನಗೆ ಕೆಂಪು ಕೂದಲಿದೆ, ನಾವಿಬ್ಬರೂ ಸ್ಪೆಷಲ್” ಎಂದ ಜಾನು.

ಕುಸುಮಾಗೆ ಜಾನು ಹೇಳಿದ್ದು ತಿಳಿಯಲಿಲ್ಲ. ಜಾನು ಅವಳ ಕೈ ಹಿಡಿದು ಎಳೆದುಕೊಂಡು ಹೊರಟ.

“What is lame?” asks Jaanu.

“I can’t move my legs. My feet are the wheel-chair.
But I am still no different from the other children.”

Jaanu shakes his head,” You are different.”

“No! You and I, we are like the others!”, says Kusuma.

Jaanu again shakes his head, “You sit in a wheel-chair. I have red-hair.
You and I have something special.”

Kusuma doesn’t understand him.
Jaanu takes her by the hand and pulls her with him.



ಅವರಿಬ್ಬರೂ ಸೂಪರ್ ಮಾರ್ಕೆಟ್ ಹೊರಬಾಗಿಲಿಗೆ ಬಂದರು.

ಅನೇಕ ಕೆಲಸಗಳನ್ನು ನೀನೊಬ್ಬಳೆ ಮಾಡಬಲ್ಲೆ. ಆದರೆ ಕೆಲವು ಕೆಲಸಗಳಿಗೆ ಇತರರ ಸಹಾಯ ಬೇಕು. 'ಮೆಟ್ಟಿಲಿಳಿಯುವಾಗ ಯಾರದ್ದಾದರೂ ಸಹಾಯ ಕೇಳು' ಎಂದ ಜಾನು.

ಕುಸುಮ ಧೈರ್ಯ ಮಾಡಿದಳು. ಪಕ್ಕದಲ್ಲಿ ಹೋಗುತ್ತಿದ್ದ ಒಬ್ಬನನ್ನು "ಸಹಾಯ ಮಾಡಿ' ಎಂದಳು.

ಆ ಮನುಷ್ಯ ಗಾಬರಿಗೊಂಡ. 'ಅಯ್ಯೋ ನಾನು ನಿಮ್ಮನ್ನು ನೋಡಲೇ ಇಲ್ಲ.. ನನಗೆ.. ಈಗ.. ಹೇಗೆ...' ಏನೇನೋ ವಟಗುಟ್ಟಿದ. ಅವನು ಕುಸುಮಾಳಿಗೆ ಸಹಾಯ ಮಾಡಿದ.

ಜಾನು ಮತ್ತು ಕುಸುಮ ಪರಸ್ಪರ ಕಣ್ಣು ಮಿಟುಕಿಸಿಕೊಂಡರು.

They stop at the exit.

"You can do a lot of things on your own. But sometimes you need help. Like everyone else," says Jaanu. "Ask someone to help you over the step."

Kusuma gathers up courage. She asks a man passing by in a hurry.

The man turns red. "I didn't see you .... didn't know... and how.." he stammers and helps.

Jaanu and Kusuma wink at each other.



ಬೆಂಚಿನ ಮೇಲೆ ಅಜ್ಜ ಅಜ್ಜಿಯರು ಇನ್ನೂ ಕುಳಿತೇ ಇದ್ದರು.
ಕುಸುಮ ಅಜ್ಜಿಯ ಬಳಿ ಬಂದು ಅವಳ ಕೈಮುಟ್ಟಿ, "ನಿಮ್ಮನ್ನು ನೋಡಿದರೆ ಅಯ್ಯೋ ಅನಿಸುತ್ತೆ".
ಇದು ನಿಮಗೆ ಎಂದು 'ಲಾಲಿ ಪಾಪ್' ಒಂದನ್ನು ಅಜ್ಜಿಯ ಕೈಯ್ಯಲ್ಲಿಟ್ಟಳು.
ಅಜ್ಜಿ ಬೆಚ್ಚಿ ಬಿದ್ದಳು. ಬಾಯಿ ಅಗಲಿಸಿ ಕುಸುಮಾಳನ್ನೇ ನೋಡಿದಳು.
'ನನಗೇನಾಗಿದೆ ಎಂದು ನೀವು ಕೇಳಿದಿರಲ್ವ' ಎಂದು ಕುಸುಮ ಅಜ್ಜನನ್ನು ಕೇಳಿದಳು.
"ನನಗೊಬ್ಬ ಫ್ರೆಂಡ್ ಸಿಕ್ಕಿದ್ದಾನೆ, ನಾನು ಖುಷಿಯಲ್ಲಿದ್ದೀನಿ'' ಎಂದು ನಕ್ಕಳು.
''ಸ್ಪೆಷಲ್ ಫ್ರೆಂಡ್'' ಎಂದ ಜಾನು. ಕುಸುಮ ಮತ್ತು ಜಾನು ಗಾಲಿ ಕುರ್ಚಿಯಲ್ಲಿ ಗಿರಗಿರನೆ ಸುತ್ತಿದರು.
ಅಜ್ಜ ಅಜ್ಜಿಯರಿಗೆ ತಲೆ ತಿರುಗಿದಂತಾಯಿತು.

The old man and the old woman are still sitting on the bench.
Kusuma taps the woman on the arm. "We feel sorry for you too," she says and puts a lollipop into her hand, "this is for you."
The old woman is shocked. She gapes at Kusuma.
"You wanted to know what happened to me?" Kusuma asks the man.
"I've found a friend and I'm happy...," she laughs.
"Someone special," adds Jaanu. Both Kusuma and Jaanu turn around and around until the old man and the old woman start feeling dizzy



ಜೀಬ್ರಾ ಕ್ರಾಸಿಂಗ್ ಹತ್ತಿರ ಕುಸುಮ ಮತ್ತು ಜಾನುಗೆ ಪುಟ್ಟಿ ಮತ್ತು ಅವಳ ತಾಯಿ ಮತ್ತೆ ಸಿಕ್ಕಿದರು.
ಈ ಬಾರಿ ಪುಟ್ಟಿ ಯಾವ ಪ್ರಶ್ನೆಯನ್ನು ಕೇಳಲಿಲ್ಲ. ಅವರಮ್ಮ ಹೇಳಿದ್ದನ್ನು ಸರಿಯಾಗಿ ಪಾಲಿಸಿದ್ದಳು.
ಹಲೋ, "ನಾನು ಕುಂಟಿ" ಎಂದಳು ಕುಸುಮ. ಪುಟ್ಟಿಯ ತಾಯಿ ಬೆಚ್ಚಿಬಿದ್ದರು.
''ಕುಂಟಿ'' ಅಂದ್ರೆ ಏನಮ್ಮ, ಪುಟ್ಟಿಯು ತನ್ನ ತಾಯಿಯನ್ನು ಕೇಳಿದಳು.
''ಹಾಗೆಂದರೆ ನಡೆಯಲು ಆಗುವುದಿಲ್ಲ'' ಎಂದಳು ಕುಸುಮ.
"ನಾವು ನಡೆಯುವುದಿಲ್ಲ ಒಟ್ಟಿಗೆ ಚಲಿಸುತ್ತೇವೆ" ಎಂದ ಜಾನು.

At the zebra crossing they again meet Putti and her mother.
This time Putti doesn't ask any questions. She has learnt that one doesn't.

"Hello," Kusuma calls out to her, "I am handicapped".
Putti's mother is horrified.

"What does that mean, handicapped?" asks Putti.

"For example, not being able to walk," explains Kusuma.

"We don't need to walk, we can ride," explains Jaanu.



ಜಾನು ಕುಸುಮಾಳ ಗಾಲಿ ಕುರ್ಚಿಯ ಹಿಂದೆ ನಿಂತ.

ಅವರಿಬ್ಬರೂ ಬೀದಿಯುದ್ದಕ್ಕೂ ಭರ್‍ರನೆ ಹೊರಟರು. ಪುಟ್ಟಿ ಇವರ ಹಿಂದೆ ಓಡಿ ಬಂದಳು.

Jaanu gets onto the back of Kusuma's wheel-chair.
They both zoom down the street. Putti runs with them.



ಈಗಲೂ ಜನರು ಇವರನ್ನು ನೋಡತೊಡಗಿದರು.

ಆ ಹೋಟೆಲ್ಲಿನ ಯಜಮಾನನೂ, ಪೇಪರ್ ಮಾರುವ ಹೆಂಗಸೂ ಪಿಳಪಿಳನೆ ನೋಡಿದರು.

ಕುಸುಮಾಗೆ ಈಗ ಮುಜುಗರವಾಗಲಿಲ್ಲ, ಅವಳಿಗೆ ಇನ್ನೆಂದೂ ಬೇಸರವೆನಿಸದು.

This time too, people stare.
Especially the man in the cafe and the woman selling newspapers.
But it doesn't bother Kusuma anymore.

ಫ್ರಾನ್ಸ್ ಜೋಸೆಫ್ ಹುಯೇಗ್ ಮೂಲತಃ ಆಸ್ಟ್ರಿಯಾ ದೇಶದವರು. ಅವರು *My feet are the wheel chair* ಎಂಬ ಕಥೆಯನ್ನು 1993 ರಲ್ಲಿ ಬರೆದಿದ್ದಾರೆ.

ವಿ.ಎಸ್.ಎಸ್.ಶಾಸ್ತ್ರಿ ಯವರು ಗಣಿತ ಮತ್ತು ವಿಜ್ಞಾನ ಸಂವಹನಕಾರರು ಮತ್ತು ಬಹಳ ವರ್ಷಗಳಿಂದ ಜನ ವಿಜ್ಞಾನ ಚಳುವಳಿಯ ಜೊತೆಗೆ ಇರುವವರು. ಇವರೊಬ್ಬ ಸೃಜನಶೀಲ ಒರಿಗಾಮಿ ಮತ್ತು ಕಿರಿಗಾಮಿ ಕಲಾವಿದರು. ಕಾಗದ ಮತ್ತು ಗೊಂಬೆಗಳ ಮೂಲಕ ವಿಜ್ಞಾನ ಮತ್ತು ಗಣಿತವನ್ನು ಕಲಿಸುವ ಆಸಕ್ತರು. ಇವರು ಕೋಲಾರದಲ್ಲಿ ವಾಸವಾಗಿದ್ದಾರೆ. ಇವರು *My feet are the wheel chair* ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಡಾ. ರಾಜರ್ಷಿ ಸೆನ್ ಗುಪ್ತ ಕಲಾವಿದರು ಮತ್ತು ಕಲಾ ಇತಿಹಾಸಕಾರರು. ಅವರು ಪ್ರಸ್ತುತ ಹೈದರಾಬಾದ್ ವಿಶ್ವವಿದ್ಯಾಲಯದಲ್ಲಿ ಬೋಧಿಸುತ್ತಾರೆ. ಇವರು ಗಾಲಿ ಕುರ್ಚಿಯೇ ನನ್ನ ಕಾಲುಗಳು ಪುಸ್ತಕದಲ್ಲಿರುವ ಚಿತ್ರಗಳನ್ನು ರಚಿಸಿದ್ದಾರೆ.

Franz-Joseph Huainigg is an Austrian author. He wrote *My feet are the wheel chair* in 1993.

VSS Sastry is a science and mathematics communicator and a long associate of people's science movement. He is a creative origami and kirigami artist and loves to teach the concepts of mathematics, geometry through papers and puppets and lives in Kolar in Karnataka. He translated *My feet are the wheel chair* in Kannada.

Dr Rajarshi Sengupta is an artist, art historian and currently teaching at the University of Hyderabad. He illustrated *My feel are the wheel chair*.





ಭಾರತ ಜ್ಞಾನ ವಿಜ್ಞಾನ ಸಮಿತಿ–ಕರ್ನಾಟಕ
**Bharat Gyan Vigyan Samiti - Karnataka**

₹. 80/-